ಜಯರಾಮಯ್ಯ ಜಿ.ಟಿ.*

# ಕುಣಿಗಲ್ ನಾಡು

ಬೆಂಗಳೂರು ಹಾಸನ ರಸ್ತೆಯಲ್ಲಿ ಬೆಂಗಳೂರಿನಿಂದ ಸುಮಾರು ೭೫ ಕಿ.ಮೀ. ದೂರದಲ್ಲಿರುವ ತುಮಕೂರಿನಿಂದ ದಕ್ಷಿಣಕ್ಕೆ ಸುಮಾರು ೩೫ ಕಿ.ಮೀ. ದೂರದಲ್ಲಿರುವ ತಾಲ್ಲೂಕು ಕೇಂದ್ರವೇ ಕುಣಿಗಲು

ಬೆಂಗಳೂರು ಜಿಲ್ಲೆಯ ಸುಪ್ರಸಿದ್ಧ ಸ್ಥಳವಾದ ಶಿವಗಂಗೆಯಲ್ಲಿ ಹುಟ್ಟುವ ನಳಿನಿ, ನಾಗಿನಿ ಮತ್ತು ಕಮಲ ಎಂಬ ಝುರಿಗಳು ಇಲ್ಲಿ ಐಕ್ಯವಾಗುತ್ತವೆ. ಕತೆಯೊಂದರ ಪ್ರಕಾರ ಉತ್ತರ ಭಾರತದ ರಾಜನಾದ 'ನೃಗ' ಎಂಬ ಚಕ್ರವರ್ತಿಯು ಇಲ್ಲಿ ಸ್ನಾನ ಮಾಡಿ ತನಗಂಟಿದ್ದ ಕುಷ್ಠರೋಗವನ್ನು ಕಳೆದು ಕೊಂಡನಂತೆ. ಆದುದರಿಂದಲೆ ಆ ಸ್ಥಳದಲ್ಲಿ ದೊಡ್ಡ ಕೆರೆಯೊಂದನ್ನು ಕಟ್ಟಿಸಿದನೆಂದು[1] ಹೇಳಲಾಗಿದೆ. ಕುಣಿಗಲು ಪೂರ್ವಕ್ಕೆ ಇರುವ ಕೆರೆಯೇ ಇಂದಿನ ದೊಡ್ಡಕೆರೆ.

ಈ ಸ್ಥಳಕ್ಕೆ ಕುಣಿಗಲು ಎಂಬ ಹೆಸರು ಹೇಗೆ ಬಂದಿತು ಎಂಬುದರ ಬಗ್ಗೆ ನಿಖರವಾದ ಮಾಹಿತಿಗಳಿಲ್ಲ ಸ್ಥಳನಾಮಗಳಿಗೆ ಒಂದು ಮಹತ್ವದ ಅರ್ಥ ಇದೆಯೆಂದು ಆ ಅರ್ಥವನ್ನು ಆ ಸ್ಥಳದ ಹಳೆಯ ನಾಮರೂಪವನ್ನು ಪರಿಶೀಲಿಸುವುದರ ಮೂಲಕ ಖಚಿತ ಪಡಿಸಿಕೊಳ್ಳಬಹುದೆಂದು ಇತಿಹಾಸಕಾರರು ಹೇಳಿದ್ದಾರೆ. ಅದರ ಪ್ರಕಾರ (i) ಪ್ರತಿಯೊಂದು ಸ್ಥಳನಾಮಕ್ಕೂ ಅರ್ಥ ಇದ್ದೇಇದೆ (ii) ಸ್ಥಳನಾಮಗಳು ಎದೆಂದಿಗೂ ಪೌರಾಣಿಕ ಕಥನ, ಕಾವ್ಯಕಲ್ಪನೆ ಒಳಗೊಂಡಿರುವುದಿಲ್ಲ. (iii) ಸಾಮಾನ್ಯವಾಗಿ ಸ್ಥಳನಾಮಗಳಲ್ಲಿ ಎರಡು ಘಟ್ಟಕಗಳಿದ್ದು ಒಂದು ಸಾಮಾನ್ಯ ಅರ್ಥವನ್ನು ಇನ್ನೊಂದು ವಿಶೇಷಾರ್ಥವನ್ನು ನಿರ್ದೇಶಿಸುವುದಿದೆ. (iv) ಸರಿಯಾದ ಅರ್ಥ ವಿವರಣೆ ನೀಡಬೇಕಿದ್ದರೆ ಉಪಭಾಷೆ, ಧ್ವನಿಶಾಸ್ತ್ರ, ಸ್ಥಳೀಯ ಚಾರಿತ್ರಿಕ ದಾಖಲೆ ಮುಂತಾದವುಗಳೊಂದಿಗೆ ಪ್ರಾಚೀನ ತಮ ವಿಶ್ವಸನೀಯ ರೂಪವನ್ನು ಕಂಡು ಹಿಡಿಯುವುದು ಅಗತ್ಯ.

ಪ್ರಸ್ತುತ ಕುಣಿಗಲು ಸ್ಥಳಕ್ಕೆ ನಾಮ ನಿಷ್ಪತ್ತಿಯನ್ನು ಈ ಕೆಳಕಂಡ ಎರಡು ಮೂಲಗಳಿಂದ ಬಂದಿರಬಹುದೆಂದು ಹೇಳಬಹುದಾಗಿದೆ. ಶಾಸನಗಳು ಕಂಡು ಬರುವ ಕುಣಿಂಗಿಲ್, ಕುಣುಂಗಿಲ್ ಎಂಬ ಶಬ್ದ ಪ್ರಯೋಗಗಳಿವೆ. ಈ ಶಬ್ದಗಳು ಸಸ್ಯಸಂಪತ್ತನ್ನು ಮತ್ತು ಖನಿಜ ಸಂಪತ್ತನ್ನು ಅರ್ಥೈಸುತ್ತವೆ. ಕುಣಿಂಗ್ + ಇಲ್ → ಕುಣಿಂಗಿಲ್ → ಕುಣಿಗಿಲ್ → ಕುಣಿಗಲು ಎಂದಾಗಿರಬೇಕು. ಕುಣಿಂಗ್ ಎಂದರೆ ಗುರಗಂಜಿ ಗಿಡ[2] ಇಲ್ ಎಂದರೆ ಪ್ರದೇಶ ಮನೆ. ಗುರುಗಂಜಿ ಗಿಡಗಳು ಎಲ್ಲ ಕಡೆಯಲ್ಲಿಯೂ ಹೆಚ್ಚಿಗೆ ಕಂಡುಬರುವುದಿಲ್ಲ. ಆದರೆ ಇಲ್ಲಿ ಸಾಮಾನ್ಯವಾಗಿ ಕಂಡು ಬರುತ್ತವೆ. [ಕುಣಿ–ಎಂದರೆ ನಂದಿವೃಕ್ಷ ಎಂದು ಸಹ ಕರೆಯಲಾಗಿದೆ. ಅಮರಕೋಶ ದ್ವಿತೀಯ ಕಾಂಡ ೧೭೭ನೆಯ ಶ್ಲೋಕ]

* ಇತಿಹಾಸ ಉಪನ್ಯಾಸಕರು, ವಿವೇಕಾನಂದ ಪದವಿ ಪೂರ್ವ ಕಾಲೇಜು ರಾಜಾಜಿನಗರ, ಬೆಂಗಳೂರು-೫೬೦ ೦೧೦

1 ತುಮಕೂರು ಜಿಲ್ಲಾ ದರ್ಶನ-ಪು. ೧೭೯

2 ದಿ.ಇದಿ. ಡ್ರವಿಡಿಯನ್ ಎಟಿಮಲಾಜಿಕಲ್ ಡಿಕ್ಷನರಿ, ೧೯೬೪, ಪು. ೧೭೦.

ಮೂಲದ ಬಗ್ಗೆ ಮತ್ತೊಂದು ನಿಷ್ಪತ್ತಿಯನ್ನು ಕೂಡ ಗಮನಿಸಬಹುದಾಗಿದೆ. ಕುಣಿ+ಇಂಗು→ಕುಣಿಂಗ್→ ಕುಣಿಗಲ್ ಎಂದಾಗಿರುವ ಸಾಧ್ಯತೆ ಕೂಡ ಇದೆ. ಕುಣಿ–ಸಂಕುಚಿತ ಗೊಂಡಿರುವ ಕಲ್ಲು ಮತ್ತು ಇಂಗು ಎಂದರೆ ಒಣಗು, ಬತ್ತು, ಅಡಗು, ಎಂದು ಅರ್ಥ ವಿದೆ[3] ಇಂದಿಗೂ ಸಹ ಕುಣಿಗಲ್ಲು ಸುತ್ತಮುತ್ತ ಸಣ್ಣ ಸಣ್ಣ ಕಲ್ಲುಗಳಿರುವ ಗುಡ್ಡಗಳನ್ನು ಕಾಣಬಹುದು. ಬಹುಶಃ ಮಳೆಯ ನೀರು ಬಹಳ ಬೇಗ ಇಂಗುತ್ತಿತ್ತು. ಅಥವ ಒಣಗುತ್ತಿತ್ತು. ಇದರಿಂದಾಗಿ ಎರಡು ವಿಷಯು ಗಳ ಸಮ್ಮಿಶ್ರದಿಂದಾಗಿ ಈ ಹೆಸರು ಬಂದಿರುವ ಸಾಧ್ಯತೆ ಇದೆ.

ಕತೆಯ ಪ್ರಕಾರ ಶಿವನು ಇಲ್ಲಿಯ ಪ್ರಕೃತಿಯ ರಮಣೀಯ ಚೆಲುವನ್ನು ಕಂಡು ಕುಣಿದನಂತೆ (ನೃತ್ಯ) ಶಿವನು ನರ್ತಿಸಿದಾಗ ಅಲ್ಲಿದ್ದ ಕಲ್ಲುಗಳು ಕೂಡ ಕುಣಿದವಂತೆ ಶಿವ ಕುಣಿದ ಕಲ್ಲು ಕುಣಿಗಲು ಎಂದಾಯಿತು ಎಂದಿದ್ದಾರೆ.

ಕರ್ನಾಟಕದಲ್ಲಿ ರಾಜ್ಯವಾಳಿದ ಅರಸರಲ್ಲಿ ತಲಕಾಡಿನ ಗಂಗರಿಂದ ಮೈಸೂರು ಒಡೆಯರ ಕಾಲದ ವರೆಗಿನ ಶಿಲಾ ಶಾಸನಗಳು ಇಲ್ಲಿ ಸಿಗುತ್ತವೆ. ಮಾಗಡಿ ತಾಲ್ಲೂಕು ಕುಪ್ಪೆ ಪಾಳ್ಯದಲ್ಲಿ ಸಿಕ್ಕಿರುವ ಶಾಸನದ ಪ್ರಕಾರ ಗಂಗರ ೨ನೆಯ ಶಿವಮಾರನು ಕುಣಿಂಗಿಲ್ ನಾಡಿನ ರಾಜ್ಯಪಾಲನಾಗಿದ್ದನೆಂದು ಗೊತ್ತಾಗುತ್ತದೆ.

ಹಿಂದಿನ ರಾಜರುಗಳು ಆಡಳಿತದ ಅನುಕೂಲ ಕ್ಕಾಗಿ ರಾಜ್ಯವನ್ನು ವಿಷಯುಗಳು, ಮಂಡಲ, ನಾಡು ಎಂಬುದಾಗಿ ವಿಂಗಡಿಸುತ್ತಿದ್ದರು. ಕುಣಿಗಲು ಹೊಯ್ಸಳರ ಕಾಲದಲ್ಲಿ ಇಂತಹ ಒಂದು ಆಡಳಿತ ಘಟಕ ವಾಗಿತ್ತು ಎಂಬುದು ಕ್ರಿ.ಶ. ೧೧೧೭ರ ಈ ಶಾಸನದಿಂದ ಕಂಡುಬರುತ್ತದೆ.

ಶ್ರೀ ಮನ್ಮಾಹಾ ಮಂಡಳೇಶ್ವರ ತ್ರಿಭುವನಮಲ್ಲ
ತಲಕಾಡು ಕೊಂಡ ಭುಜಬಳ ವೀರಗಂಗ
ಹೊಯ್ಸಳ
ದೇವರು ಪೃಥ್ವೀ ರಾಜ್ಯಂಗೆಯ್ಯೆ ಕುಣಿಗಿಲು
ನಾಡ
ಕಾವಗೌಡನ ಹಳ್ಳಿಯ ರಾಮೇಶ್ವರ ದೇವರಿಗೆ
ಕಾಳಾಯುಕ್ತ
ಸಂವತ್ಸರದ ಅಸ್ವೇಜ ಸುದ್ಧ ಪಂಚಮಿ
ಸೋಮವಾರದಂದು....[4]

ಮೈಸೂರು ಒಡೆಯರ ಕಾಲದಲ್ಲಿ ೧೮ ಆಡಳಿತದ ವಿಭಾಗಗಳು ಇದ್ದವು. ಅದರ ಒಂದು ವಿಭಾಗದ ಉಲ್ಲೇಖ ಇಲ್ಲಿನ ಶಾಸನದಲ್ಲಿ ಕಂಡುಬರುತ್ತದೆ.

ಸ್ವಸ್ತಿಶ್ರೀ ವಿಜಾಯಭ್ಯುದಯ ಶಾಲಿವಾಹನ
ಶಕ
ವರ್ಷಂಗಳು ೧೬೮೬ ಸಂದ ವರ್ತಮಾನವಾದ
ತಾರಣ
ಸಂವತ್ಸರದ ಚೈತ್ರ ಶು. ೫ರಲ್ಲು ಶ್ರೀ
ಮದ್ರಾಜಾಧಿ ರಾಜ
ರಾಜ ಪರಮೇಶ್ವರಪ್ರತಿಮ ಪ್ರೌಢ
ಪ್ರತಾಪವೀರ
ನರ ಪತಿ ಮಹಿಶೂರ ಶ್ರೀ ಕೃಷ್ಣರಾಜ
ವಡೆಯರೈನವರು
ಅಂಣ್ಯಾ ಶಾಸ್ತ್ರಿಗಳಿಗೆ ಬರೆಸಿ ಕೊಟ್ಟ ಭೂದಾನ
ತಾಂಮ್ರ ಶಾಸನದ
ಕ್ರಮವೆಂತೆಂದರೆ ಪಟ್ಟಣದ ಹೋಬಳಿ
ವಿಚಾರದ ಚಾವಡಿ
ಹುಲಿಯೂರು ದುರ್ಗ ಸ್ಥಳದ....[5]

**೫೦೦ ವರಹಗಳ ನಾಡು :** ಗುಬ್ಬಿಯ ೬೧ ನೆಯ ಶಾಸನವು ಈ ಬಗ್ಗೆ ವಿವರಗಳನ್ನು ನೀಡುತ್ತದೆ. ಚಾಲುಕ್ಯರ ರಾಜ ಬಾಲವರ್ಮ, ಅವನ ಮಗ ಯಶೋವರ್ಮ ಅವನ ಮಗ ವಿಮಲಾದಿತ್ಯರ ಬಗ್ಗೆ ತಿಳಿಸುತ್ತದೆ. ವಿಮಲಾದಿತ್ಯನು ಐದುನೂರು ವರಹಗಳ ನಾಡಗಿದ್ದ ಕುಣಿಂಗಿಲ್ ವಿಭಾಗಕ್ಕೆ ರಾಜ್ಯಪಾಲ ನಾಗಿದ್ದನು.[6]

3 —"—೪೩೦—ಪು. ೪೦
4 ಎಪಿಗ್ರಾಫಿಯ ಕರ್ನಾಟಕ ಸಂ. ೧೨-ಪು. ೮೭
5 —"—"—ಪು. ೯೮
6 —"—"—ಪು. ೮೮

ಅರಮನೆಗಳು, ದೇವಾಲಯಗಳು, ಸ್ಮಾರಕಗಳು, ಕೋಟೆ ಕೊತ್ತಲಗಳು ಗತ ಇತಿಹಾಸದ ಕುರುಹು ಗಳಾಗಿವೆ. ಕೋಟೆಗಳಲ್ಲಿ ಮೂರು ಪ್ರಕಾರಗಳು ಕಂಡುಬರುತ್ತವೆ. ಗಿರಿದುರ್ಗ, ಜಲದುರ್ಗ, ಸ್ಥಳ ದುರ್ಗ, ಕುಣಿಗಲುನಲ್ಲಿ ಕಂಡುಬರುವುದು ಸ್ಥಳದುರ್ಗದ ಅವಶೇಷ ಗಳು ದೊಡ್ಡಕೆರೆಯ ಹಿಂಭಾಗದಲ್ಲಿ ದೇವಾಲಯಕ್ಕೆ ಹೊಂದಿಕೊಂಡಂತೆ ಸುಮಾರು ೩೦೦ ಮೀಟರ್ ಉದ್ದದ ಪಾಳುಕೋಟೆಯ ಗೋಡೆಯನ್ನು ಕಾಣ ಬಹುದಾಗಿದೆ. ರಾಷ್ಟ್ರಕೂಟರ ರಾಜ ೧ನೆಯ ಧ್ರುವನ ಮಗ ವೀರ ಕಂಬರಾಯನ ಕಾಲದಲ್ಲಿ ಕೋಟೆ ಯನ್ನು ಕಟ್ಟಲು ಪ್ರಾರಂಭ ಮಾಡಿರಬೇಕು. [ಧ್ರುವನು ಗಂಗರ ರಾಜ ಶಿವಮಾರನನ್ನು ಸೋಲಿಸಿ ಸೆರೆಯಲ್ಲಿಟ್ಟ ನಂತರ ಬಹುಶಃ ಈ ವೀರ ಕಂಬರಾಯನನ್ನು ಈ ಭಾಗದ ಆಡಳಿತ ನೋಡಿಕೊಳ್ಳಲು ನೇಮಿಸಿರಬಹುದು] [7]ಕುಣಿಗಿಲ್‌ನಲ್ಲಿ ಕಟ್ಟಿದ ಕೋಟೆಗೆ ನಾಲ್ಕು ಮಹಾದ್ವಾರ ಗಳು ಇದ್ದವು. ಅವುಗಳಲ್ಲಿ ಒಂದು ಬಾಗಿಲ ಹೆಸರು ಮೈಸೂರು ಹೆಬ್ಬಾಗಿಲು ಎಂಬುದಾಗಿ ಶಾಸನದಿಂದ ಕಂಡುಬರುತ್ತವೆ.[8]

ಹೊಯ್ಸಳ ರಾಜ ಸೋಮೇಶ್ವರನು (ಕ್ರಿ.ಶ. ೧೨೩೩-೧೨೫೩] ತನ್ನ ಮಕ್ಕಳಿಬ್ಬರಿಗೆ ರಾಜ್ಯವನ್ನು ಹಂಚಿಕೊಡುವಾಗ ತುಮಕೂರು ಪ್ರಾಂತ್ಯಕ್ಕೆ ಸೇರಿ ಕೊಂಡಂತೆ ಉರ್ಡಿಗೆರೆಯಿಂದ ಹೆಬ್ಬೂರಿನವರಗೆ ૩ನೆಯ ನರಸಿಂಹನಿಗೂ [ಕ್ರಿ.ಶ. ೧೨೫೩-೯೩], ಕುಣಿಗಲು ಮತ್ತು ತಮಿಳು ನಾಡಿನ ಭಾಗಗಳನ್ನು ರಾಮನಾಥನಿಗೂ [೧೨೫೩-೯೫] ಹಂಚಿಕೊಟ್ಟಿದ್ದನು. ಯಲಹಂಕ ನಾಡಪ್ರಭುಗಳ ಕಾಲದಲ್ಲಿ ಇದು ಪ್ರಸಿದ್ಧವಾದ ಆಡಳಿತ ಕೇಂದ್ರವಾಗಿತ್ತು ಎಂಬುದಕ್ಕೆ ಇವರ ಕಾಲದ ಶಾಸನಗಳು ಕುಣಿಗಲ್ ಸುತ್ತ ಮುತ್ತಲಿನ ಪ್ರದೇಶಗಳಲ್ಲಿ ದೊರೆಯುತ್ತವೆ. ಉದಾ :

ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರುಷಂಗಳು ೧೫೨೧ಯ ವಿಕಾರಿ ಸಂವತ್ಸರದ ಜೇಷ್ಟ ಬ೧೩ಲು ಚತುರ್ಥ ಗೋತ್ರದ ಯಲಹಂಕ ನಾಡಪ್ರಭು ಯಿಂಮಡಿ ಹಿರೀ ಕೆಂಪಯ್ಯ ಗೌಡರೆಯ್ಯ ನವರ ಪುಣ್ಯಾ ಸ್ತ್ರೀಗಳಾದ ವೆಂಕಟ ಕೃಷ್ಣಾಜಂಮ್ಮ ನವರು ಮಾಡಿದ ಆಗ್ರಹಾರಕೆ ಥಾನ ಧರ್ಮ ಸಾಧನ

ಸಿಲಾ ಶಾಸನ ಕ್ರಮ ವೆಂತೆಂದರೆ ಸಂಮ<br>ಕುಣಿಗಿಲಿಗೆ ಸಲುನ ಪಡುವ ದಿಕ್ಕಿನಲ್ಲಿ<br>ಕಟ್ಟ ದೇವೆಂಕಟ ಕ್ರುಷ್ಣಸಾಗರ ಗ್ರಾಮ....[9]

ಈಗ ಈ ಗ್ರಾಮದಲ್ಲಿ ಜನವಸತಿ ಇಲ್ಲವಾಗಿದೆ. ಈ ಗ್ರಾಮಕ್ಕೆ ೩೦ ಖಂಡುಗ ಬತ್ತಬೆಳೆಯುವ ಗದ್ದೆ ಯನ್ನು ತಮ್ಮ ಅತ್ತೆ ಲಿಂಗಾಜಮ್ಮ ಮತ್ತು ಮಾವ ಯಿಂಮ್ಮಡಿ ಕೆಂಪೇಗೌಡರೆಯ್ಯನವರಿಗೂ ಪುಣ್ಯವಾಗಲಿ ಎಂದು ಪತ್ತಿಬಿಟ್ಟಿಕೊಟ್ಟ ವಿಷಯ ಈ ಶಾಸನದಲ್ಲಿ ರೂಪಿತವಾಗಿದೆ.

ಇಂದು ಕುಣಿಗಲ್‌ನಲ್ಲಿ ಹಲವು ಪುರಾತನ ದೇವಾಲಯಗಳನ್ನು ಕಾಣಬಹುದಾಗಿದೆ. ಪ್ರಮುಖ ವಾದವುಗಳೆಂದರೆ ನರಸಿಂಹ ದೇವಾಲಯ ಪದ್ಮೇಶ್ವರ ದೇವಾಲಯ, ಸೋಮೇಶ್ವರ ದೇವಾಲಯ, ಗಣೇಶ, ಆಂಜನೇಯ ದೇವಾಲಯ ಮೊದಲಾದವುಗಳು. ಇಂದು ಕೃಷಿ, ರೇಷ್ಮೆ ಮತ್ತು ಅಶ್ವ ತಳಿಗೆ ಹೆಸರಾಗಿರುವ ಈ ಪ್ರದೇಶವು ತುಮಕೂರು ಜಿಲ್ಲೆಯಲ್ಲಿಯೇ ಹೆಸರಾಂತ ತಾಲ್ಲೂಕಾಗಿದೆ.

ಈ ಪ್ರಬಂಧವನ್ನು ರಚಿಸಲು ಮಾರ್ಗದರ್ಶನ ನೀಡಿದ ದೇವರ ಕೊಂಡಾರೆಡ್ಡಿ, ಕೆ.ಆರ್. ಗಣೇಶ್ ಮತ್ತು ಪಿ.ವಿ. ಕೃಷ್ಣಮೂರ್ತಿಯವರಿಗೆ ನಾನು ಆಭಾರಿ ಯಾಗಿದ್ದೇನೆ.

7 ಎಪಿಗ್ರಾಫಿಯ ಕರ್ನಾಟಿಕಾ ಸಂ. ೧೨-ಪು. ೮೯
8 —"—"—ಪು. ೮೯
9 —"—"—ಪು. ೧೦೮